# ಕರ್ನಾಟಕ ವಿಧಾನ ಪರಿಷತ್

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 178
ವಿಧಾನ ಪರಿಷತ್ ಸದಸ್ಯರ ಹೆಸರು : ಶ್ರೀ ಕವಟಗಿ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವ ದಿನಾಂಕ : 17.07.2019
ಉತ್ತರಿಸುವ ಸಚಿವರು : ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು ಹಿರಿಯ ನಾಗರೀಕರ ಸಬಲೀಕರಣ ಇಲಾಖಾ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಸರ್ಕಾರವು 2012ರಲ್ಲಿ ಸಮಗ್ರ ಮಕ್ಕಳ ಅಭಿವೃದ್ಧಿ ಯೋಜನೆ (Restructured ICDS) ಜಾರಿ ಮಾಡಿದ್ದು, ನಮ್ಮ ರಾಜ್ಯದಲ್ಲಿ ಈ ಯೋಜನೆಯ ಅಳವಡಿಕೆಯ ಬಗ್ಗೆ ಸರ್ಕಾರದ ನಿಲುವೇನು; | Restructured ICDS ಯೋಜನೆಯನ್ನು NGO Participation ಕುರಿತು ಅಂಗನವಾಡಿ ಕಾರ್ಯಕರ್ತೆ ಹಾಗೂ ಸಹಾಯಕಿಯರು ವ್ಯಕ್ತಪಡಿಸಿದ ವಿರೋಧದ ಹಿನ್ನಲೆಯಲ್ಲಿ ರಾಜ್ಯದಲ್ಲಿ ಅನುಷ್ಠಾನಗೊಳಿಸಲಾಗಿರುವುದಿಲ್ಲ. ಹಾಲಿ 2017-18ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಐಸಿಡಿಎಸ್ ಯೋಜನೆಯಡಿ ಬರುವ "Umbrella ICDS" ರಡಿ ಮುಂದುವರೆದ ಯೋಜನೆಯನ್ನಾಗಿ ಆದೇಶಿಸಿದಂತೆ ರಾಜ್ಯದಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ. |
| ಆ) | ರಾಜ್ಯದಲ್ಲಿ ಪುನರ್ ಸಂಘಟಿತ ಮಾದರಿಯಲ್ಲಿ ಸಮಗ್ರ ಶಿಶು ಅಭಿವೃದ್ಧಿ ಯೋಜನೆ ಜಾರಿಯಲ್ಲಿದೆಯೇ; | ಹೌದು |
| ಇ) | ಈ ಪುನರ್ ಸಂಘಟಿತ ಯೋಜನೆ ಮಾದರಿ ಜಾರಿಯಲ್ಲಿ ಅಂಗನವಾಡಿ ಕಾರ್ಯಕರ್ತೆಯರನ್ನು ಬಾಲವಿಕಾಸ ಸಮಿತಿಯಲ್ಲಿ (BVS) ಯಾವ ರೀತಿಯಲ್ಲಿ ತೊಡಗಿಸಿಕೊಳ್ಳಲಾಗಿದೆ; | ರಾಜ್ಯದಲ್ಲಿ ಪ್ರತಿ ಅಂಗನವಾಡಿ ಕೇಂದ್ರಕ್ಕೊಂದರಂತೆ ಬಾಲವಿಕಾಸ ಸಮಿತಿಯನ್ನು ರಚಿಸಲಾಗಿದೆ. ಸದರಿ ಅಂಗನವಾಡಿ ಕಾರ್ಯಕರ್ತೆಯು ಸಮಿತಿಯ ಸದಸ್ಯ ಕಾರ್ಯದರ್ಶಿಯಾಗಿದ್ದು ಅಂಗನವಾಡಿ ಕೇಂದ್ರದ ಸಮಸ್ತ ನಿರ್ವಹಣೆಯ ಜವಾಬ್ದಾರಿಯನ್ನು ನಿರ್ವಹಿಸುತ್ತಿರುತ್ತಾರೆ. |
| ಈ) | ಈ ಯೋಜನೆಯ ಜಾರಿಯಿಂದ ಏನು ಪರಿಣಾಮವಾಗಿದೆ ಮತ್ತು ಅದರ ಫಲಿತಾಂಶವೇನು; | ರಾಜ್ಯದಲ್ಲಿ "Umbrella ICDS" ಯಡಿ ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗಿದೆ.<br>1. ಅಂಗನವಾಡಿ ಸೇವೆಗಳು-ಈ ಯೋಜನೆಯಡಿ ರಾಜ್ಯದಲ್ಲಿ ಮಕ್ಕಳು, ಕಿಶೋರಿಯರು, ಗರ್ಭಿಣಿ, ಬಾಣಂತಿಯರು- ಸೇರಿದಂತೆ ಸುಮಾರು 48,29,301 ಫಲಾನುಭವಿಗಳು ಸೌಲಭ್ಯವನ್ನು ಪಡೆಯುತ್ತಿದ್ದಾರೆ. ಈ ಯೋಜನೆಯಡಿ ಫಲಾನುಭವಿಗಳಿಗೆ ಪೌಷ್ಠಿಕ ಆಹಾರ, ಹಾಲು, ಮೊಟ್ಟೆಗಳನ್ನು ವಿತರಿಸಲಾಗುತ್ತಿದ್ದು ಪೌಷ್ಠಿಕತಾ ಮಟ್ಟವನ್ನು ಸುಧಾರಿಸುವಲ್ಲಿ ಸಹಕಾರಿಯಾಗಿದೆ. |

| | | |
|---|---|---|
| | | 2. ಪ್ರಾಯಪೂರ್ವ ಬಾಲಕಿಯರ ಯೋಜನೆ: ಈ ಯೋಜನೆಯಡಿ ಶಾಲೆಯಿಂದ ಹೊರಗುಳಿದ 11–14 ವರ್ಷದ ಪ್ರಾಯಪೂರ್ವ ಬಾಲಕಿಯರಿಗೆ ಸೌಲಭ್ಯ ಒದಗಿಸಲಾಗುತ್ತಿದ್ದು, ರಾಜ್ಯದಲ್ಲಿ ಒಟ್ಟು 17,106 ಪ್ರಾಯಪೂರ್ವ ಬಾಲಕಿಯರನ್ನು ಗುರುತಿಸಲಾಗಿದೆ. ಇವರನ್ನು ಶಾಲೆಗೆ ಮರುದಾಖಲಿಸಲು ರಾಜ್ಯದಾದ್ಯಂತ ಕ್ರಮ ವಹಿಸಲಾಗುತ್ತಿದೆ.<br>3. ರಾಷ್ಟ್ರೀಯ ಶಿಶು ಪಾಲನಾ ಕೇಂದ್ರ ಯೋಜನೆ: ಈ ಯೋಜನೆಯಡಿ ರಾಜ್ಯದಲ್ಲಿ 15,275 ಫಲಾನುಭವಿಗಳು ಸೌಲಭ್ಯ ಪಡೆಯುತ್ತಿರುತ್ತಾರೆ. ಕಟ್ಟಡ ನಿರ್ಮಾಣದ ಕೂಲಿ ಕಾರ್ಮಿಕರ ಮಕ್ಕಳನ್ನು ಪ್ರತಿನಿತ್ಯ ನೋಡಿಕೊಳ್ಳುವ ಸಲುವಾಗಿ ಸದರಿ ಸ್ಥಳದಲ್ಲಿಯೇ ಶಿಶು ಪಾಲನಾ ಕೇಂದ್ರಗಳನ್ನು ನಡೆಸುತ್ತಿದ್ದು, ಅವರ ಮಕ್ಕಳನ್ನು ಪಾಲಿಸುವುದು ಈ ಯೋಜನೆಯ ಮುಖ್ಯ ಉದ್ದೇಶವಾಗಿದೆ.<br>4. ಪ್ರಧಾನ ಮಂತ್ರಿ ಮಾತೃವಂದನಾ ಯೋಜನೆ; ಸದರಿ ಯೋಜನೆಯಡಿ ರಾಜ್ಯದಲ್ಲಿ ಒಟ್ಟು ಫಲಾನುಭವಿಗಳು ಸೌಲಭ್ಯ ಪಡೆಯುತ್ತಿರುತ್ತಾರೆ. ಗರ್ಭಿಣಿ–ಬಾಣಂತಿಯರಲ್ಲಿ ಪೌಷ್ಟಿಕತಾ ಮಟ್ಟವನ್ನು ಹೆಚ್ಚಿಸಲು ರೂ. 5,000/– ಗಳನ್ನು ಮೂರು ಕಂತುಗಳಲ್ಲಿ ಸಹಾಯಧನವನ್ನು ನೇರ ನಗದು ರೂಪದಲ್ಲಿ ಫಲಾನುಭವಿಗಳ ಖಾತೆಗೆ ವರ್ಗಾಯಿಸಲಾಗುತ್ತಿದೆ.<br>5. ಮಕ್ಕಳ ರಕ್ಷಣಾ ಸೇವೆಗಳು: ಬಾಲನ್ಯಾಯ (ಮಕ್ಕಳ ಪಾಲನೆ ಮತ್ತು ರಕ್ಷಣೆ) ಕಾಯ್ದೆ ಹಾಗೂ ಬಾಲನ್ಯಾಯ (ಮಕ್ಕಳ ಪಾಲನೆ ಮತ್ತು ರಕ್ಷಣೆ) ಕರ್ನಾಟಕ ನಿಯಮಗಳ ಅನುಸಾರ ಸದರಿ ಯೋಜನೆಯಡಿ ಮಕ್ಕಳಿಗೆ ಪಾಲನೆ, ಪೋಷಣೆ ಮತ್ತು ರಕ್ಷಣೆಯ ಅಗತ್ಯವಿರುವ ಮತ್ತು ಕಾನೂನು ಸಂಘರ್ಷಕ್ಕೆ ಒಳಗಾದ ಮಕ್ಕಳಿಗೆ ಸೇವೆ ಒದಗಿಸಲಾಗುತ್ತಿದೆ. ಒಟ್ಟು 26675 ಮಕ್ಕಳು ಈ ಪ್ರಯೋಜನ ಪಡೆಯುತ್ತಿದ್ದಾರೆ.<br>6. ಪೋಷಣ್ ಅಭಿಯಾನ: ರಾಜ್ಯದಲ್ಲಿ ಮಕ್ಕಳಲ್ಲಿ ಉಂಟಾಗುವ ಕುಂಠಿತ ಬೆಳವಣಿಗೆ, ಅಪೌಷ್ಟಿಕತೆಯನ್ನು ಮತ್ತು ಮಕ್ಕಳು, ಕಿಶೋರಿಯರು ಹಾಗೂ ಮಹಿಳೆಯರಲ್ಲಿ ಉಂಟಾಗುವ ರಕ್ತ ಹೀನತೆಯನ್ನು ತಡೆಗಟ್ಟಲು, ಕಡಿಮೆ ತೂಕದ ಮಕ್ಕಳ ಜನನ ಪ್ರಮಾಣವನ್ನು ಕಡಿಮೆ ಮಾಡಿ ಪೌಷ್ಟಿಕತಾ ಮಟ್ಟವನ್ನು ಹೆಚ್ಚಿಸುವ ಉದ್ದೇಶದಿಂದ ರಾಜ್ಯದಾದ್ಯಂತ ಎಲ್ಲಾ ಜಿಲ್ಲೆಗಳಲ್ಲಿ ಈ ಯೋಜನೆಯನ್ನು ಜಾರಿಗೆ ತರಲಾಗಿದೆ. |

ಸಂ:ಮಮಇ 84 ಐಸಿಡಿ 2019

16-7-19

(ಡಾ॥ ಜಯಮಾಲ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ವಿಕಲಚೇತನರ,
ಹಿರಿಯ ನಾಗರೀಕರ ಸಬಲೀಕರಣ ಇಲಾಖಾ ಸಚಿವರು.